# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2223 |
| ಸದಸ್ಯರ ಹೆಸರು | ಶ್ರೀಮತಿ ಎಸ್.ವೀಣಾ ಅಚ್ಚಯ್ಯ |
| ಉತ್ತರಿಸುವ ದಿನಾಂಕ | 26/03/2021 |
| ಉತ್ತರಿಸುವವರು | ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಖಾಸಗಿ ರೇಷ್ಮೆ ಚಾಕಿ ಸಾಕಾಣಿಕಾ ಕೇಂದ್ರಗಳನ್ನು ತೆರೆಯಲು ಇರುವ ನಿಯಮಗಳೇನು: ರಾಜ್ಯ ಹಾಗೂ ಕೇಂದ್ರ ಸರ್ಕಾರದಿಂದ ಸದರಿ ಕೇಂದ್ರಗಳನ್ನು ಸ್ಥಾಪಿಸಲು ದೊರೆಯುತ್ತಿರುವ ನೆರವು, ಸಾಲ, ಸಹಾಯಧನ, ಪ್ರೋತ್ಸಾಹಧನ ಹಾಗೂ ಇತರೆ ಸೌಲಭ್ಯಗಳೇನು: | ರಾಜ್ಯದಲ್ಲಿ ಖಾಸಗಿ ರೇಷ್ಮೆ ಚಾಕಿ ಸಾಕಾಣಿಕೆ ಕೇಂದ್ರ ತೆರೆಯಲು ಇರುವ ನಿಯಮಗಳು ಈ ಕೆಳಕಂಡಂತೆ ಇವೆ:-<br>1. ಫಲಾನುಭವಿಯು ಕೇಂದ್ರ ರೇಷ್ಮೆ ಮಂಡಳಿಯಲ್ಲಿ ನೋಂದಣಿ ಮಾಡಿಕೊಳ್ಳಬೇಕು.<br>2. ದ್ವಿತಳಿ ಚಾಕಿ ಸಾಕಾಣಿಕಾ ಕೇಂದ್ರವನ್ನು ತೆರೆಯಲು ಇಚ್ಛಿಸುವ ಫಲಾನುಭವಿ ಮಾನ್ಯತೆ ಪಡೆದ ರಾಜ್ಯ/ಕೇಂದ್ರ ರೇಷ್ಮೆ ತರಬೇತಿ ಸಂಸ್ಥೆಯಲ್ಲಿ 3 ತಿಂಗಳು ಅವಧಿಗೆ "ಚಾಕಿ ಸಾಕಾಣಿಕೆ" ಬಗ್ಗೆ ತರಬೇತಿಯನ್ನು ಪಡೆಯಬೇಕು.<br>3. ಫಲಾನುಭವಿಗೆ ಕನಿಷ್ಠ 2 ಎಕರೆ ಸ್ವಂತ ಅಥವಾ ಗುತ್ತಿಗೆ ಆಧಾರದ ಮೇಲೆ ಪಡೆದ ನೀರಾವರಿವುಳ್ಳ ಹಿಪ್ಪುನೇರಳೆ ಚಾಕಿ ತೋಟವಿದ್ದು ಹನಿ ನೀರಾವರಿ ಅಳವಡಿಸಿರಬೇಕು.<br>4. ಸಾವಯವ ಗೊಬ್ಬರಗಳನ್ನು ಹೆಚ್ಚಾಗಿ ಬಳಸಬೇಕು.<br>5. ಚಾಕಿ ಸಾಕಾಣಿಕೆಗೆ ಉಪಯುಕ್ತವಾದ ಎಸ್ 36 ಅಥವಾ ಎಸ್ 13 ಹಿಪ್ಪುನೇರಳೆ ತೋಟವನ್ನು ಹೊಂದಿರಬೇಕು.<br>6. 5000 ರೋಗ ರಹಿತ ಮೊಟ್ಟೆಗಳ ಚಾಕಿ ಕಟ್ಟುವುದಕ್ಕೆ (42 X 30 X 16) 1260 ಚದರಡಿ ಚಾಕಿ ಸಾಕಾಣಿಕಾ ಕಟ್ಟಡವನ್ನು ಚಾಕಿ ತೋಟದಲ್ಲಿಯೇ ನಿರ್ಮಿಸಿರಬೇಕು.<br>7. ವಾರ್ಷಿಕ 1.50 ರಿಂದ 1.60 ಲಕ್ಷ ದ್ವಿತಳಿ ಮೊಟ್ಟೆ ಚಾಕಿ ಕಟ್ಟುವ ಸಾಮರ್ಥ್ಯತೆಯಿರಬೇಕು.<br>8. ಪ್ರತಿ ತಂಡಕ್ಕೆ 5 ಸಾವಿರ ಮೊಟ್ಟೆಗಳಂತೆ ವರ್ಷಕ್ಕೆ 32 ತಂಡಗಳಲ್ಲಿ ಚಾಕಿ ಮಾಡುವ ಸಾಮರ್ಥ್ಯ ಇರಬೇಕು.<br>9. ಚಾಕಿ ಸಾಕಾಣಿಕೆಗೆ ಅಗತ್ಯವಾದ ಎಲ್ಲಾ ಸಲಕರಣೆಗಳನ್ನು ಖರೀದಿಸಬೇಕು.<br><br>ಕೇಂದ್ರ ರೇಷ್ಮೆ ಮಂಡಳಿಯ ಸಹಯೋಗದೊಂದಿಗೆ ರೇಷ್ಮೆ ಇಲಾಖೆಯು ಕೇಂದ್ರ ಪುರಸ್ಕೃತ "ಸಿಲ್ಕ್ ಸಮಗ್ರ" ಯೋಜನೆಯಡಿ ಹೊಸದಾಗಿ ಸ್ಥಾಪಿಸಿರುವ ನೋಂದಾಯಿತ ಖಾಸಗಿ ದ್ವಿತಳಿ ಚಾಕಿ ಸಾಕಾಣಿಕಾ ಕೇಂದ್ರಗಳಿಗೆ ಹಿಪ್ಪುನೇರಳೆ ತೋಟ ಸ್ಥಾಪನೆ/ನಿರ್ವಹಣೆ, ಚಾಕಿ ಸಾಕಾಣಿಕಾ ಕಟ್ಟಡ ನಿರ್ಮಾಣ ಮತ್ತು ಚಾಕಿ ಸಾಕಾಣಿಕಾ ಸಲಕರಣೆ ಖರೀದಿಗೆ (ಮೂರು ಘಟಕಗಳು ಸೇರಿ) ಸಹಾಯಧನ ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯಡಿ ಇದಕ್ಕಾಗಿ ಘಟಕ ದರ ರೂ.12.00 ಲಕ್ಷಗಳನ್ನು |

----2

| | | |
|---|---|---|
| | | ನಿಗದಿಪಡಿಸಿದ್ದು, ಸಹಾಯಧನ ಸಾಮಾನ್ಯ ವರ್ಗಕ್ಕೆ ಶೇ.75ರಷ್ಟು ಅಂದರೆ ರೂ.9.00 ಲಕ್ಷಗಳನ್ನು ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ವರ್ಗಕ್ಕೆ ಶೇ.90 ರಷ್ಟು ಅಂದರೆ ರೂ.10.80 ಲಕ್ಷಗಳನ್ನು ನೀಡಲಾಗುವುದು. ಸಹಾಯಧನದ ಮೊತ್ತವನ್ನು ಡಿಬಿಟಿ / ಖಜಾನೆ-2ರ ಮುಖಾಂತರ ಫಲಾನುಭವಿ ಬ್ಯಾಂಕ್ ಖಾತೆಗೆ ನೇರವಾಗಿ ಜಮಾ ಮಾಡಲಾಗುವುದು.<br><br>ಫಲಾನುಭವಿಯು ಸಹಾಯಧನದ ಪ್ರಸ್ತಾವನೆಯನ್ನು ಮಾರ್ಗಸೂಚಿಯ ರೀತ್ಯಾ ಅರ್ಹ ದಾಖಲಾತಿಗಳೊಂದಿಗೆ ಕ್ಷೇತ್ರಮಟ್ಟದಲ್ಲಿ ರೇಷ್ಮೆ ವಿಸ್ತರಣಾಧಿಕಾರಿಗಳು, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಉಪನಿರ್ದೇಶಕರು ಮತ್ತು ರೇಷ್ಮೆ ಜಂಟಿ ನಿರ್ದೇಶಕರವರ ಮೂಲಕ ಸಮುಚಿತ ಮಾರ್ಗದಲ್ಲಿ ಕೇಂದ್ರ ಕಛೇರಿಗೆ ಸಲ್ಲಿಸಿದ್ದಲ್ಲಿ, ಮಾರ್ಗಸೂಚಿಯ ಪ್ರಕಾರ ಪರಿಶೀಲಿಸಿ ಸಹಾಯಧನಕ್ಕೆ ಅರ್ಹರಿದ್ದಲ್ಲಿ ಮಂಜೂರಾತಿ ನೀಡಿ ವಂಟನೆಯ ಲಭ್ಯತೆಗೆ ಅನುಗುಣವಾಗಿ ಸಹಾಯಧನವನ್ನು ಬಿಡುಗಡೆಗೊಳಿಸಲಾಗುವುದು. |
| ಆ) | ರಾಜ್ಯದಲ್ಲಿ ಪ್ರಸ್ತುತ ಎಷ್ಟು ಖಾಸಗಿ ಚಾಕಿ ಸಾಕಾಣಿಕಾ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ: (ಹೆಸರು ಹಾಗೂ ವಿಳಾಸದೊಂದಿಗೆ ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ 2021ರ ಫೆಬ್ರವರಿ ಅಂತ್ಯಕ್ಕೆ 254 ಖಾಸಗಿ ಚಾಕಿ ಸಾಕಾಣಿಕಾ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ. ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಖಾಸಗಿ ಚಾಕಿ ಸಾಕಾಣಿಕಾ ಕೇಂದ್ರಗಳು ಎಷ್ಟು ಚಾಕಿಯನ್ನು ರೈತರಿಗೆ ವಿತರಣೆ ಮಾಡಿವೆ? (ವರ್ಷವಾರು, ಪ್ರತಿ ಖಾಸಗಿ ಚಾಕಿ ಸಾಕಾಣಿಕಾ ಕೇಂದ್ರದ ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಖಾಸಗಿ ಚಾಕಿ ಸಾಕಾಣಿಕಾ ಕೇಂದ್ರಗಳು 2017-18,2018-19 ಹಾಗೂ 2019-20 ಸಾಲಿನಲ್ಲಿ ಚಾಕಿ ಮಾಡಿ ರೈತರಿಗೆ ವಿತರಣೆ ಮಾಡಿರುವ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |

**ಸಂಖ್ಯೆ: ರೇಷ್ಮೆ 88 ರೇಕೃವಿ 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**